ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಅರಣ್ಯ ಇಲಾಖೆಯಲ್ಲಿನ ಜೇಷ್ಠತಾ ಪಟ್ಟಿ ತಯಾರಿಕೆಯಲ್ಲಿನ ಅಕ್ರಮ ಕುರಿತು

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ)

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

136 (1035+1045+1207) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಅರಣ್ಯ ಇಲಾಖೆಯ ಉಪವಲಯ ಅರಣ್ಯಾಧಿಕಾರಿ ಹಾಗೂ ಲಿಪಿಕ ನೌಕರ ವೃಂದದ ಬಿ.ಕೆ. ಪವಿತ್ರ-1ರ ಪ್ರಕರಣದ ತೀರ್ಪನ್ನು ಅನುಷ್ಠಾನಗೊಳಿಸುವಾಗ ಉದ್ದೇಶಪೂರ್ವಕವಾಗಿ ನ್ಯೂನತೆಗಳೊಡನೆ ಅನರ್ಹ ನೌಕರರಿಗೆ ಮುಂಬಡ್ತಿ ನೀಡದಿರುವ ಹಗರಣದ ಕುರಿತು ಸಿ.ಐ.ಡಿ. ತನಿಖೆ ನಡೆಸಲು ಕಡತ ಸಂಖ್ಯೆ: ಅಪಜೀ/17/ಅಇವಿ/2019ರಲ್ಲಿ ಆದೇಶವಾಗಿದ್ದು, ಈ ತನಿಖೆಯು ಯಾವ ಹಂತದಲ್ಲಿದೆ ; (ಪೂರ್ಣ ವಿವರಗಳನ್ನು ಒದಗಿಸುವುದು)

(ಆ) ಬಿ.ಕೆ. ಪವಿತ್ರ-2ರಂತೆ ವೃತ್ತಮಟ್ಟದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸರ್ಕಾರದ ದಿನಾಂಕ: 13-04-2018ರ ಮಾರ್ಗಸೂಚಿಯನ್ನು ಹಾಗೂ ಅರಣ್ಯ ಪಡೆಯ ಮುಖ್ಯಸ್ಥರು ನೀಡಿರುವ ಸೂಚನೆಗಳನ್ನು ಪಾಲನೆ ಮಾಡದೆ, ನಿಯಮಾವಳಿಗಳ ವಿರುದ್ಧ ಜೇಷ್ಠತಾ ಪಟ್ಟಿ ತಯಾರು ಮಾಡಿರುವುದನ್ನು ಮನಗಂಡ ಸರ್ಕಾರವು ಒಂದು ಸಮಿತಿಯನ್ನು ರಚಿಸಿದ್ದು, ಈ ಸಮಿತಿ ವರದಿ ಸಲ್ಲಿಸಿರುವುದೇ ; ಇದ್ದಲ್ಲಿ ಪ್ರತಿ ಒದಗಿಸುವುದು ; ಇಲ್ಲದಿದ್ದಲ್ಲಿ, ವರದಿ ಸಲ್ಲಿಸಲು ನಿರ್ದಿಷ್ಟ ಕಾಲಮಿತಿಯನ್ನು ಸರ್ಕಾರವು ನಿಗದಿಪಡಿಸಿ ನೌಕರರಿಗೆ ನ್ಯಾಯ ಒದಗಿಸುವುದೇ;

(ಇ) ವೃತ್ತಮಟ್ಟದ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿರುವ ಸಮಿತಿ ಸದಸ್ಯರ ವಿವರ ಒದಗಿಸುವುದು;

(ಈ) ಉದ್ದೇಶಪೂರ್ವಕವಾಗಿ ಇಂತಹ ಅಕ್ರಮವನ್ನು ಎಸಗುತ್ತಿರುವ ಅರಣ್ಯ ಅಧಿಕಾರಿಗಳನ್ನು ಗುರುತಿಸಲಾಗಿದೆಯೇ ; ಇದ್ದಲ್ಲಿ, ಅವರ ಹೆಸರು ಮತ್ತು ಹುದ್ದೆವಾರು ವಿವರ ಒದಗಿಸುವುದು ;

(ಉ) ಆಯಾಯ ವೃತ್ತದಲ್ಲಿ ಪತ್ತೆಯಾಗಿರುವ ಅಕ್ರಮಗಳ ಪ್ರಕರಣವಾರು ವಿವರ ಮತ್ತು ಕಾರಣೀಭೂತರಾದ ಅಧಿಕಾರಿ/ನೌಕರರ ಹೆಸರು, ಹುದ್ದೆವಾರು ವಿವರ ಹಾಗೂ ಅವರುಗಳ ವಿರುದ್ಧ ಕೈಗೊಂಡ ಕ್ರಮಗಳೇನು ; ಕ್ರಮ ಕೈಗೊಳ್ಳದಿದ್ದಲ್ಲಿ, ಸರ್ಕಾರ ನಿಗದಿತ ಅವಧಿಯೊಳಗೆ ಕ್ರಮ ಕೈಗೊಳ್ಳುವುದೇ ?